ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಸ್ತನ ಕ್ಯಾನ್ಸರ್ ಹೆಚ್ಚಾಗುತ್ತಿರುವ ಬಗ್ಗೆ

ಡಾ. ಜೈಮಾಲ ರಾಮಚಂದ್ರ (ನಾಮನಿರ್ದೇಶನ ಹೊಂದಿದವರು)

140 (1226) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿ ಮಹಿಳೆಯರಿಗೆ ಸ್ತನ ಕ್ಯಾನ್ಸರ್ ಹೆಚ್ಚಾಗುತ್ತಿರುವ ವಿಷಯವು ಸರ್ಕಾರದ ಗಮನದಲ್ಲಿದೆಯೇ ; ಇದ್ದಲ್ಲಿ ಕಳೆದ 3 ವರ್ಷದಿಂದ ರಾಜ್ಯದಲ್ಲಿ ಈ ಕ್ಯಾನ್ಸರ್‌ಗೆ ಬಲಿಯಾದವರ ಸಂಖ್ಯೆ ಹಾಗೂ ರೋಗಿಗಳ ಸಂಖ್ಯೆ ಎಷ್ಟು ;

(ಆ) ಮಹಿಳೆಯರಿಗೆ ಸಾಮಾಜಿಕ ಹಿತದೃಷ್ಟಿಯಿಂದ ಈ ಬಗೆಯ ಕ್ಯಾನ್ಸರನ್ನು ಪರೀಕ್ಷಿಸಿಕೊಳ್ಳಲು ಕಡ್ಡಾಯವಾಗಿ ಪರೀಕ್ಷೆಗೆ ಒಳಪಡಲು ಕಾನೂನನ್ನು ರೂಪಿಸಲು ಸರ್ಕಾರವು ಯೋಚಿಸಿದೆಯೇ ;

(ಇ) ಸ್ತನ ಕ್ಯಾನ್ಸರನ್ನು ಪರೀಕ್ಷಿಸುವ / ತಪಾಸಣೆ ಮಾಡುವ ವೈದ್ಯಕೀಯ ಉಪಕರಣಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಅಳವಡಿಸಲು ಸರ್ಕಾರ ಚಿಂತಿಸಿದೆಯೇ ; (ವಿವರ ನೀಡುವುದು)

(ಈ) ವಿವಿಧ ರೀತಿಯ ಕ್ಯಾನ್ಸರ್‌ನ ಸಮಸ್ಯೆಯು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವುದಕ್ಕೆ ಕಾರಣವೇನು ; ಸರ್ಕಾರವು ಇದಕ್ಕೆ ತಜ್ಞರ ಸಮಿತಿಯನ್ನು ರಚಿಸಿದೆಯೇ ;

(ಉ) ಅತ್ಯಂತ ಕಡುಬಡವರಿಗೆ ಈ ಸ್ತನ ಕ್ಯಾನ್ಸರ್‌ನ ಪರೀಕ್ಷೆಯನ್ನು ಉಚಿತವಾಗಿ ನೀಡಲು ಸರ್ಕಾರ ಚಿಂತಿಸಿದೆಯೇ ?